# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಕೆಆರ್‌ಎನ್‌ಎಸ್ — ೧೯

ಸಂಪುಟ ೧ ಸಂಚಿಕೆ ೩೦ ಕೊಪ್ಪ ೧೩-೩-೮೩ ಶನಿವಾರ ಬೆಲೆ ೪೦ ಪೈಸೆ

## ಬಿದ್ರಗೋಡಿನಲ್ಲಿ ಬೆಂಕಿ ಅನಾಹುತ

## ೫ ಮನೆ ಭಸ್ಮ, ೧೦ ಕುಟುಂಬ ನಿರ್ವಸಿತ

(ನಮ್ಮ ಪ್ರತಿನಿಧಿಯಿಂದ)

**ಬೇಗಾರು: ಇಲ್ಲಿಗೆ ಸಮೀಪದ ಬಿದ್ರಗೋಡಿನಲ್ಲಿ ಮಾ. ೭ರಂದು ಸಂಭವಿಸಿದ ಬೆಂಕಿ ಅನಾಹುತದಲ್ಲಿ ೫ ಮನೆಗಳು ಭಸ್ಮವಾಗಿ ೧೦ ಸಂಸಾರಗಳು ತಮ್ಮ ಸರ್ವಸ್ವವನ್ನೂ ಕಳೆದು ಕೊಂಡಿದ್ದಾರೆ.**

ಬೆಳಿಗ್ಗೆ ೧೧ ಗಂಟೆಯ ಹೊತ್ತಿಗೆ ಒಂದು ಮನೆಯ ಮಾಡಿನಲ್ಲಿ ಬೆಂಕಿ ಕಾಣಿಸಿಕೊಂಡಾಗ ನಿವಾಸಿಗಳೆಲ್ಲರೂ ಕೂಲಿ ಕೆಲಸಕ್ಕೆ ಹಾಗೂ ಒಣ ಕಟ್ಟಿಗೆ ತರಲು ಕಾಡಿಗೆ ಹೋಗಿದ್ದರೆನ್ನಲಾಗಿದೆ.

ಹತ್ತು ಕುಟುಂಬಗಳಿಂದ ಒಟ್ಟು ಸುಮಾರು ೪ ಸಾವಿರ ರೂ. ನಗದು, ೭೦ ಕ್ವಿಂಟಾಲ್ ಭತ್ತ, ಹುಲ್ಲಿನ ಬಣವೆಗಳು, ಒಡವೆ-ಪಾತ್ರೆ-ಬಟ್ಟೆಗಳು, ೪ ವಾಚು, ೨ ರೇಡಿಯೋ, ಮೇಜು-ಕುರ್ಚಿಗಳಲ್ಲದೆ, ೪ ಕೋಳಿ ಹಾಗೂ ೨ ತಿಂಗಳ ಹಸುವಿನ ಕರುವೊಂದು ಸುಟ್ಟುಹೋಗಿದ್ದು, ಒಟ್ಟು ೨ ಲಕ್ಷ ರೂ.ಗಳಷ್ಟು ನಷ್ಟವಾಗಿದೆಯೆನ್ನಲಾಗಿದೆ. ತೊಟ್ಟ ಬಟ್ಟೆಯ ಹೊರತು ಉಳಿದೆಲ್ಲ ಭಸ್ಮವಾಗಿದೆ. ಕೆಲವರಿಗೆ ಅಲ್ಪಸ್ವಲ್ಪ ಗಾಯವಾಗಿದ್ದು **ಯಾರಿಗೂ ಪ್ರಾಣಾಪಾಯ** ವಾಗಿಲ್ಲ ಎಂದು ತಿಳಿದು ಬಂದಿದೆ.

### ತೀವ್ರ ಕ್ರಮ

ಅನಾಹುತದ ಸುದ್ದಿ ತಿಳಿದಾಕ್ಷಣ ಸ್ಥಳಕ್ಕೆ ಧಾವಿಸಿದ ಆಗುಂಬೆ ಪೋಲೀಸರು ಹಾಗೂ ಊರ ಜನ ಸೇರಿ, ನೀರಿನ ಅಭಾವದ ಕಾರಣ ದೂರದಿಂದ ನೀರು ಹೊತ್ತು ಬೆಂಕಿ ಹೆಚ್ಚು ಹರಡದಂತೆ ತಡೆದರು. ಪಂಚಾಯ್ತಿ ಅಧ್ಯಕ್ಷ ಎ.ರಾಮಪ್ಪ ಹೆಗ್ಡೆ ಹಾಗೂ ಸದಸ್ಯರಾದ ವಾಸುದೇವರಾವ್, ಬೆಳ್ಳಿಗಪ್ಪ ಹೊಸಳ್ಳಿ ಇವರುಗಳು ಗ್ರಾಮಸ್ಥರೊಂದಿಗೆ ಬೆಂಕಿ ಆರಿಸುವಲ್ಲಿ ಶ್ರಮಿಸಿದರು.

ಸುದ್ದಿ ತಿಳಿದ ತೀರ್ಥಹಳ್ಳಿ ಠಾಣಾಧಿಕಾರಿ ಉಮೇಶ್, ಸರ್ಕಲ್ ಇನ್ಸ್‌ಪೆಕ್ಟರ್ ಶಿವಣ್ಣ, ಕ್ಷೇತ್ರಾಭಿವೃದ್ಧಿ ಅಧಿಕಾರಿ ಸಿ.ಆರ್. ಪಿ.ಗೌಡ ಇವರು ಸ್ಥಳಕ್ಕೆ ಭೇಟಿ ಕೊಟ್ಟು ಮಹಜರು ನಡೆಸಿದ್ದಲ್ಲದೆ, ಸ್ವಂತ ಹಣದಿಂದ ೧೦೦ ರೂ., ೧೦೦ ರೂ. ಹಾಗೂ ೫೦ ರೂ.ಗಳನ್ನು ನಿರ್ವಸಿತರಿಗೆ ನೀಡಿದರು.

### ಆತ್ಮಹತ್ಯೆಗೆ ಯತ್ನ

ಮನೆಗಳು ಧಗಧಗ ಉರಿಯುತ್ತಿದ್ದಾಗ ನೋಡಿ ತಡೆಯಲಾಗದ ನಿವಾಸಿಯೊಬ್ಬರು ಬೆಂಕಿಗೆ ಹಾರಿ ಪ್ರಾಣ ಕಳೆದು ಕೊಳ್ಳಲೆತ್ನಿಸಿದರೆಂದೂ, ಸೇರಿದ್ದ ಜನ ಅವರನ್ನು ಬಚಾವು ಮಾಡಿದರೆಂದೂ ಆತ ಸುಮಾರು ೪ ಗಂಟೆ ಪ್ರಜ್ಞಾಹೀನರಾಗಿದ್ದರೆಂದೂ ಗೊತ್ತಾಗಿದೆ.

### ಸರ್ಕಾರದಿಂದ ಆಗಬೇಕಾದ್ದು

ತಮ್ಮ ಸರ್ವಸ್ವವನ್ನೂ ಕಳೆದುಕೊಂಡ ಈ ನಿರ್ಭಾಗ್ಯರಿಗೆ ಜನತಾ ಮನೆ, ಕುಡಿವ ನೀರು ಹಾಗೂ ಸರ್ಕಾರದಿಂದ ದೊರೆಯುವ ಇನ್ನಿತರ ಎಲ್ಲಾ ಸೌಲಭ್ಯಗಳೂ ಕೂಡಲೇ ಸಿಗಬೇಕಾಗಿದೆ. ಈ ಬಗ್ಗೆ ಕ್ಷೇತ್ರದ ಶಾಸಕ ಡಿ.ಬಿ.ಚಂದ್ರೇಗೌಡರಿಗೆ ಮನವಿಯನ್ನು ಕಳಿಸಲಾಗಿದೆ.

---

**ಅನಿವಾರ್ಯ ಕಾರಣಗಳಿಂದ ೨೦-೩-೮೩ರ ಸಂಚಿಕೆ ಪ್ರಕಟವಾಗುವುದಿಲ್ಲ. ಓದುಗರು ಸಹಕರಿಸಬೇಕಾಗಿ ಕೋರಿಕೆ. —ಸಂ.**

---

### ಓದುಗರ ವೇದಿಕೆ, ಕೊಪ್ಪ.

### ತೆರೆದ ಬಾವಿ: ಪುರಸಭೆ ನಿರ್ಣಯ

ಇಲ್ಲಿನ ಹಿರೀಕೆರೆಯಲ್ಲಿ ತೆರೆದ ಬಾವಿ ತೋಡಿಸುವ ಬಗ್ಗೆ ಪುರಸಭೆ ನಿರ್ಣಯ ಮಾಡಿ ಕಳಿಸಿದರೆ ಮುಂದಿನ ಕೆಲಸ ಮಾಡಲು ತಮಗೆ ಸಾಧ್ಯವಾಗುತ್ತದೆಂದು ಶಾಸಕರು ಸೂಚಿಸಿದ ಮೇರೆಗೆ, ಪುರಸಭಾಧ್ಯಕ್ಷರನ್ನು ಸಂಪರ್ಕಿಸಿದಾಗ ಮುಂದಿನ ಕೌನ್ಸಿಲ್ ಸಭೆಯಲ್ಲಿ ನಿರ್ಣಯ ಮಂಡಿಸಿ ಮುಂದಕ್ಕೆ ಕಳಿಸುವುದಾಗಿ ತಿಳಿಸಿದ್ದಾರೆ.

### ಇಂಜಿನಿಯರ್ ಭೇಟಿ

ಪುರಸಭೆ ಮುಖ್ಯಾಧಿಕಾರಿಗಳು ಮಾ.೭ರಂದು ಚಿಕ್ಕಮಗಳೂರಿನ ನಗರ ನೀರು ಸರಬರಾಜು ಇಲಾಖೆ ಇಂಜಿನಿಯರ್‌ರನ್ನು ದೂರವಾಣಿಯಲ್ಲಿ ಸಂಪರ್ಕಿಸಿದಾಗ ೧೮ರಂದು ಕೊಪ್ಪಕ್ಕೆ ಬರುವುದಾಗಿ (ಸಾಧ್ಯವಾದರೆ ಭೂ ಗರ್ಭ ಶಾಸ್ತ್ರಜ್ಞರೊಂದಿಗೆ) ತಿಳಿಸಿದರು. ಆದರೆ ಅದೇ ದಿನ ಪುರಸಭಾಧ್ಯಕ್ಷರು ಅವರನ್ನು ಮೊಕ್ತಾ ಕಂಡಾಗ ಮಾ. ೧೬ರಂದು ಭೂ.ಶಾ.ರೊಂದಿಗೆ ಖಂಡಿತ ಬರುವುದಾಗಿ ತಿಳಿಸಿದ್ದಾರಂತೆ. (ಕಂತೂ ಬರುವುದು ಖಾತ್ರಿ ಎಂದಂತಾಯಿತು.)

### ತಿದ್ದುಪಡಿ

ಕಳೆದ ವಾರದ (೬-೩-೮೩) "ಶಾಸಕರ ಗಮನ ಸೆಳೆದ ಕೊಪ್ಪ ನೀರು ಸಮಸ್ಯೆ" ಎಂಬ ಸುದ್ದಿಯಲ್ಲಿ ಒಂದು ತಿದ್ದುಪಡಿ: ಶಾಸಕರು ಈ ಸಮಸ್ಯೆಯನ್ನು ಜಿಲ್ಲಾ ಅಭಿವೃದ್ಧಿ ಮಂಡಳಿಯಲ್ಲಿ ಪ್ರಸ್ತಾಪಿಸುವುದಾಗಿ ಹೇಳಿದರು; ಹಾಗೂ ಈ ಬಗ್ಗೆ ಸಹಾಯಕ ಇಂಜಿನಿಯರನ್ನು ಸಂಪರ್ಕಿಸಲು ಮುಖ್ಯಾಧಿಕಾರಿಗಳಿಗೆ ಸೂಚಿಸಿದರು.

## ಕೊಪ್ಪನಗರ ಭಾಜಪಾ ಅಧ್ಯಕ್ಷರಾಗಿ ಶಾಂತಾರಾಂ ಶೆಟ್ಟಿ

ಕೊಪ್ಪ: ಭಾಜಪಾ ಜಿಲ್ಲಾ ಕಾರ್ಯದರ್ಶಿ ಬಿ.ಎಸ್.ಶಿವರಾಂ ಅವರ ನಿರ್ದೇಶನ ಹಾಗೂ ಜಿ.ಪಿ.ನಾಲೇಕರ್ ಅವರ ಅಧ್ಯಕ್ಷತೆಯಲ್ಲಿ ಮಾ. ೧೧ರಂದು ನಡೆದ ಭಾಜಪಾ ಸಭೆಯಲ್ಲಿ ಕೊಪ್ಪ ನಗರ ಸಮಿತಿಯನ್ನು ರಚಿಸಲಾಯಿತು. ಶಾಂತಾರಾಮ ಶೆಟ್ಟಿ (ಅಧ್ಯಕ್ಷ), ಕೆ.ಎಸ್.ರವೀಂದ್ರ ಹರ್ಷವರ್ಧನ್ (ಉಪಾಧ್ಯಕ್ಷ), ಜೆ.ಕೆ.ವಿಜಯ ಕುಮಾರ್ (ಕಾರ್ಯದರ್ಶಿ), ಧರಣೇಂದ್ರಪ್ಪ (ಖಜಾಂಚಿ) ಹಾಗೂ ೧೧ ಜನ ಸದಸ್ಯರ ಕಾರ್ಯಕಾರಿ ಸಮಿತಿಯನ್ನು ಆಯ್ಕೆ ಮಾಡಲಾಯಿತು.

### ನಿರ್ಣಯ

ಸಭೆ ಕೈಗೊಂಡ ಒಂದು ನಿರ್ಣಯದಲ್ಲಿ, ಕೊಪ್ಪ ನೀರು ಪೂರೈಕೆ ವ್ಯವಸ್ಥೆ ಪೂರ್ಣ ವಿಫಲಗೊಂಡಿದ್ದು, ಬಾವಿ, ಕೆರೆ ಮುಂತಾದ ಬೇರೆ ವ್ಯವಸ್ಥೆಗಳಿಲ್ಲದೆ ಜನ ಬವಣೆ ಪಡುತ್ತಿದ್ದಾರೆ. ಈ ವಿಫಲತೆಗೆ ಕಾರಣಗಳನ್ನು ಕಂಡು ಹಿಡಿದು, ಕುಂದು ಕೊರತೆಗಳಿಲ್ಲದಂತೆ ನೀರು ಪೂರೈಕೆಗೆ ವ್ಯವಸ್ಥೆ ಮಾಡದಿದ್ದಲ್ಲಿ ಪಕ್ಷವು ನಾಗರೀಕರನ್ನು ಸಂಘಟಿಸಿ ಹೋರಾಟ ನಡೆಸಬೇಕೆಂದು ತೀರ್ಮಾನಿಸಲಾಯಿತು.

## ಅಂಚೆ ನೌಕರರ ವಾರ್ಷಿಕ ಸಭೆ

ಕೊಪ್ಪ: ಅಂಚೆ ನೌಕರರ ಸಂಘದ ಕೊಪ್ಪ ಶಾಖೆಯ ವಾರ್ಷಿಕ ಮಹಾಸಭೆ ಏ. ೧೦ರಂದು ಕೊಪ್ಪದಲ್ಲಿ ನಡೆಯಲಿದೆ. ಈ ಸಭೆಗೆ ರಾಜ್ಯ ಸಂಘದ ಹಿರಿಯ ನಾಯಕರುಗಳು ಬರುವ ನಿರೀಕ್ಷೆಯಿದೆಯೆಂದು ಸಂಘದ ಪ್ರತಿನಿಧಿಗಳು ತಿಳಿಸಿದ್ದಾರೆ.

## ಡಿಸಿಸಿ ಬ್ಯಾಂಕ್ ಶಾಖೆ ಆರಂಭ

ಜಯಪುರ: ಚಿಕ್ಕಮಗಳೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕಿನ ೨೧ನೇ ಶಾಖೆಯನ್ನು ಇಲ್ಲಿ ಮಾ. ೬ರಂದು ಬಾಳೆಹೊನ್ನೂರಿನ ರಂಭಾಪುರಿ ಮಠಾಧೀಶರು ಉದ್ಘಾಟಿಸಿದರು. ಅಧ್ಯಕ್ಷತೆ ವಹಿಸಿದ್ದ ಶಾಸಕ ಹೆಚ್.ಜಿ.ಗೋವಿಂದಗೌಡ ಹಾಗೂ ಮುಖ್ಯ ಅತಿಥಿಗಳಾಗಿದ್ದ ಚಿಕ್ಕಮಗಳೂರು ಕ್ಷೇತ್ರದ ಶಾಸಕ ಹೆಚ್.ಎ.ನಾರಾಯಣಗೌಡ ಅವರುಗಳು ಸಹಕಾರ ಚಳುವಳಿಯ ಬಗ್ಗೆ ಅನುಭವಯುತವಾದ ಭಾಷಣ ಮಾಡಿದರು. ಯು.ಕೆ.ಶಾಮಣ್ಣ, ಬಾಳ್ತಾರು ಆನಂದರಾಮ ಭಟ್ ಅವರುಗಳೂ ಸಭೆಯಲ್ಲಿ ಉಪಸ್ಥಿತರಾಗಿದ್ದರು.

ಅದೇ ದಿನ ಹರಿಹರಪುರದಲ್ಲಿ ಬ್ಯಾಂಕಿನ ೨೨ನೇ ಶಾಖೆ ಉದ್ಘಾಟನೆಯಾಗಿದ್ದು, ಎರಡೂ ಶಾಖೆಗಳಿಂದ ಒಟ್ಟು ೨ ಲಕ್ಷ ರೂ. ಠೇವಣಿ ಸಂಗ್ರಹವಾಗಿದೆಯೆಂದು ಗೊತ್ತಾಗಿದೆ.

## ರಾಜೀನಾಮೆ ಇಲ್ಲ

ಕೊಪ್ಪ: ತಾ|| ಯುವ ಕಾಂಗ್ರೆಸ್ ಅಧ್ಯಕ್ಷ ಹೆಚ್.ಎಂ.ಶ್ರೀಧರ್ ಒಂದು ಪತ್ರಿಕಾ ಹೇಳಿಕೆ ನೀಡಿ, "ನಾನು ಪಕ್ಷಕ್ಕೆ ರಾಜೀನಾಮೆ ಕೊಡಲಿರುವುದಾಗಿ ಈಚೆಗೆ ಕೆಲವು ಪತ್ರಿಕೆಗಳಲ್ಲಿ ವರದಿಯಾಗಿರುವುದು ಸತ್ಯವಲ್ಲ. ಪಕ್ಷ ಸೋತಿತೆಂದು ನಾನು ಪಕ್ಷ ಬಿಡುವವನಲ್ಲ. ನಿಷ್ಠೆಯಿಂದ ಕೆಲಸ ಮಾಡಿ ಪಕ್ಷವನ್ನು ಪುನಃ ಸಂಘಟಿಸಲು ಶ್ರಮಿಸುತ್ತೇನೆ" ಎಂದು ತಿಳಿಸಿದ್ದಾರೆ.

## ಸಹಕಾರ ಸಂಘಗಳು, ವಾಣಿಜ್ಯ ಮತ್ತು ಭೂಅಭಿವೃದ್ಧಿ ಬ್ಯಾಂಕುಗಳಿಗೆ

## ಸಾಲ ವಸೂಲಿ ನಿಲ್ಲಿಸಲು ನೋಟೀಸು:

### ಕೊಪ್ಪ ತಾ|| ರೈತ ಸಮಿತಿ ನಿರ್ಧಾರ

ಹರಿಹರಪುರ: ರಾಜ್ಯ ರೈತ ಸಂಘದ ಪ್ರತಿನಿಧಿಗಳೊಂದಿಗೆ ಮುಖ್ಯ ಮಂತ್ರಿಗಳು ಮಾತುಕತೆ ನಡೆಸಿದಾಗ ರೈತರ ಎಲ್ಲಾ ವಿಧದ ಸಾಲಗಳ ವಸೂಲಿಯನ್ನು ನಿಲ್ಲಿಸುವ ತೀರ್ಮಾನ ಮಾಡಿರುವ ಹಿನ್ನೆಲೆಯಲ್ಲಿ ಎಲ್ಲಾ ಸಹಕಾರ ಸಂಘಗಳು, ಬ್ಯಾಂಕುಗಳು ಹಾಗೂ ಭೂ ಅಭಿವೃದ್ಧಿ ಬ್ಯಾಂಕುಗಳಿಗೆ ವಸೂಲಿ ನಿಲ್ಲಿಸುವಂತೆ ನೋಟೀಸು ನೀಡಲು ಇಲ್ಲಿ ಫೆ. ೨೭ರಂದು ನಡೆದ ಕೊಪ್ಪ ತಾ|| ರೈತ ಹಾಗೂ ರೈತಕಾರ್ಮಿಕ ಸಮಿತಿಯ ಸಭೆ ನಿರ್ಣಯಿಸಿದೆ.

ಮಳಿಗೆ ಚಂದ್ರಶೇಖರ್ ಅಧ್ಯಕ್ಷತೆ ವಹಿಸಿದ್ದ ಸಭೆಯಲ್ಲಿ ತೆಗೆದುಕೊಳ್ಳಲಾದ ಇತರ ನಿರ್ಣಯಗಳು ಹೀಗಿವೆ :— (೧) ಪಟ್ಟಾದಾರ ರೈತರೆಲ್ಲರೂ ರೈತ ಸಮಿತಿಯ ಸದಸ್ಯರಾಗುವುದು ಮತ್ತು ಗ್ರಾಮ ಮಟ್ಟದಲ್ಲಿ ರೈತರನ್ನು ಸಂಘಟಿಸುವುದು; (೨) ಕೊಪ್ಪದಲ್ಲಿ ರೈತ ಭವನ ಕಟ್ಟಲು ೧ ಎಕ್ರೆ ಜಾಗ ಮತ್ತು ಧನ ಸಹಾಯ ಒದಗಿಸುವಂತೆ ಅಧಿಕಾರಿಗಳನ್ನು ಕೋರುವುದು; (೩) ತಾ||ನ ಎಲ್ಲಾ ರೈತರಿಗೆ ೫ ಗಾಡಿ ಕಟ್ಟಿಗೆಯನ್ನು ಮರಗಳ ಗೆಲ್ಲು, ಕಡಿದು ಸಂಗ್ರಹಿಸಿಕೊಳ್ಳಲು ಲೈಸೆನ್ಸ್ ಕೊಡುವಂತೆ ಅರಣ್ಯಾಧಿಕಾರಿಗಳನ್ನು ಕೋರುವುದು.

ಮಾ. ೨೫ರಂದು ತಾ|| ರೈತರ ಸಭೆ ಕೊಪ್ಪದಲ್ಲಿ ನಡೆಸಲು ತೀರ್ಮಾನಿಸಲಾಗಿದ್ದು, ಅದರಲ್ಲಿ ರಾಜ್ಯ ರೈತ ಸಂಘದ ಪದಾಧಿಕಾರಿಗಳು ಭಾಗವಹಿಸುವ ನಿರೀಕ್ಷೆ ಇದೆಯೆಂದು ಹೇಳಲಾಗಿದೆ.

# ಅಭಿನಂದನಾ ಸಮಾರಂಭಗಳು

ನಮ್ಮ ಕ್ಷೇತ್ರದ ನೂತನ ಶಾಸಕರಾದ ಹೆಚ್.ಜಿ.ಗೋವಿಂದ ಗೌಡರಿಗೆ ಅಭಿನಂದನಾ ಸಮಾರಂಭ ಏರ್ಪಡಿಸುವವರ ಸಾಲು ದೊಡ್ಡದಾಗುತ್ತಿದೆ. ಆದರೆ, ಒಂದು ಕಡೆ ಜನತಾ ಪಕ್ಷದ ಹೊಸ ಸರ್ಕಾರ ತನ್ನ ಶಾಸಕ–ಮಂತ್ರಿಗಳಿಗೆ **ಈ** ಅಭಿನಂದನಾ ಸಮಾರಂಭ – ಹಾರ–ತುರಾಯಿಗಳ ವೈಭವವನ್ನೆಲ್ಲ ನಿಷೇಧಿಸಿದ್ದರೆ ಇನ್ನೊಂದು ಕಡೆ ಜನರೇ ಇಂಥ ಸಮಾರಂಭಗಳನ್ನು ಟೀಕಿಸತೊಡಗಿದ್ದಾರೆ. "ಹಿಂದಿನವರಿಗೂ ಈಗಿನವರಿಗೂ ಏನು ವ್ಯತ್ಯಾಸವಾಯಿತು? ಅದೇ ಆಂಧ್ರದಲ್ಲಿ ನೋಡಿ...." ಎನ್ನುತ್ತಿದ್ದಾರೆ. ಬಹುಶಃ ಇದು ಗೋವಿಂದ ಗೌಡರಿಗೂ ಗೊತ್ತಿರಬೇಕು. ಅದಕ್ಕೇ ಇರಬೇಕು, ಅವರು ಈಚೆಗೆ ಇಂಥ ಕೆಲವು ಸಮಾರಂಭಗಳಲ್ಲಿ, "ಈ ಹಾರ–ತುರಾಯಿಗಳೆಲ್ಲ ನನಗೆ ಇಷ್ಟವಿಲ್ಲ. ಆದರೂ ಜನ ವಿಶ್ವಾಸದಿಂದ ಕೊಡುತ್ತಿರುವುದರಿಂದ ಸ್ವೀಕರಿಸುತ್ತಿದ್ದೇನೆ" ಎಂದು ಮುಜುಗರಪಟ್ಟುಕೊಂಡು ಹೇಳುತ್ತಿರುವುದು.

ಅಭಿನಂದನಾ ಸಮಾರಂಭ, ಸನ್ಮಾನ ಎಲ್ಲ ಒಂದೇ. **ಸಾಮಾನ್ಯವಾಗಿ** ಇವರ ಹಿಂದೆ ಏನಾದರೊಂದು ಉದ್ದೇಶವಿರುತ್ತದೆ. ಜನಸಾಮಾನ್ಯರು ಏರ್ಪಡಿಸಿದ್ದಾದರೆ ಏನಾದರೂ ಬೇಡಿಕೆ ಸಲ್ಲಿಸುವ ಉದ್ದೇಶವಿರುತ್ತದೆ. ಶ್ರೀಮಂತರ ಸಂಘ–ಸಂಸ್ಥೆಗಳದ್ದಾದರೆ, ಶಾಸಕರನ್ನು 'ಹತ್ತಿರ' ಮಾಗಿಸಿಕೊಳ್ಳುವ ಉದ್ದೇಶವಿರುತ್ತದೆ (ಹಾಗೆನ್ನುತ್ತಾರೆ.)

ಜನ ಗೋವಿಂದ ಗೌಡರ ಹತ್ತಿರ ಬೇಡಿಕೆ ಸಲ್ಲಿಸುವುದಿದ್ದರೆ ಈ ಯಾವ ಕೃತ್ರಿಮಗಳ ಅಗತ್ಯ ಅವರಿಗಿಲ್ಲ, ನೇರವಾಗಿ ಹೇಳಿದರಾಯಿತು. ಯಾರಾದರೂ ಅನಗತ್ಯವಾಗಿ ಶಾಸಕರ ಸಮಯ ಹಾಳು ಮಾಡುವುದು ಸರಿಯಲ್ಲ. ಅವರಾದರೂ ಅಷ್ಟೆ — ತಮಗೆ ಹಾರ–ತುರಾಯಿ–ಬಾಜಾಬಜಂತ್ರಿ–ಮೆರವಣಿಗೆ – ಸನ್ಮಾನಗಳೆಲ್ಲ ಇಷ್ಟವಿಲ್ಲವಾದರೆ ಅದನ್ನು ಖಡಾಖಂಡಿತವಾಗಿ ನಿರಾಕರಿಸುವುದು ಒಳ್ಳೆಯದು. ಇಂಥ ಆಡಂಬರ ಅವರ ಸಾದಾ ನಡವಳಿಕೆಗೆ ಒಪ್ಪುವುದೂ ಇಲ್ಲ; ಒಂದು ಕಡೆಯ ಜನರ ಸಮಾಧಾನಕ್ಕಾಗಿ ಅದನ್ನು ಮಾಡಿದರೆ ಹತ್ತು ಕಡೆ ಆ ಬಗ್ಗೆ ಟೀಕೆಗೂ ಗುರಿಯಾಗಬೇಕಾಗುತ್ತೆ.

ಅನಗತ್ಯವಾಗಿ ಯಾಕೆ ಟೀಕೆಗೆ ಗುರಿಯಾಗಬೇಕು? **—ಸಂಪಾದಕ.**

# ಗುರುಗ್ರಹದಲ್ಲಿ ಜೀವಿಗಳ ಅಸ್ತಿತ್ವವಿದೆಯೆ?

**ಸೌರ** ವ್ಯೂಹದಲ್ಲಿ ಅತ್ಯಂತ ದೊಡ್ಡ ಗ್ರಹವಾದ ಗುರು ಗ್ರಹದ ಸುತ್ತ ಪರಿಭ್ರಮಿಸುವ ಉಪಗ್ರಹಗಳಲ್ಲಿ ಸಜೀವಿಗಳಿರುವ ಸಾಧ್ಯತೆ ಇದೆಯೆಂದು ಸೋವಿಯೆತ್ ವಿಜ್ಞಾನಿಗಳು ಹೇಳುತ್ತಾರೆ. ಗುರು ಗ್ರಹದ ಉಪಗ್ರಹಗಳು ಶೇಕಡಾ ೧೦ರಿಂದ ೬೦ ಅಂಶದಷ್ಟು ನೀರಿನಿಂದ ಕೂಡಿವೆ. ಅವುಗಳ ಹೊರಮೈ ೫೦ ಕಿ.ಮೀಟರ್ ದೂರದ ವರೆಗೂ ಹಿಮಾವೃತನಾಗಿದ್ದು ಅದು ವಿನಾಶಕಾರಿ ಬಾಹ್ಯಾಂತರಿಕ್ಷ ವಿಕಿರಣಗಳಿಂದ ಅವುಗಳನ್ನು ರಕ್ಷಿಸುತ್ತದೆ.

**ಈ** ಗ್ರಹಗಳ ಜಲದ ಮೇಲ್ಪದರಿನಲ್ಲಿ ಉಷ್ಣತೆ ಹಾಗೂ ಒತ್ತಡ ಹೆಚ್ಚು ಕಡಿಮೆ ಭೂಮಿಯಲ್ಲಿರುವ ಸಮುದ್ರದಾಳದ ಜಲದ ಸ್ಥಿತಿಯನ್ನೇ ಹೋಲುತ್ತದೆ ಎಂದು ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. **ಈ** ಪರಿಸ್ಥಿತಿ ಸೂಕ್ಷ್ಮಾಣು ಜೀವಿಗಳ ಅಸ್ತಿತ್ವಕ್ಕೆ ಉಪಯುಕ್ತವೆನಿಸಿದೆ. ಈ ಆಧಾರದ ಮೇಲೆ ವಿಜ್ಞಾನಿಗಳು ಅಲ್ಲಿ ಸಜೀವಿಗಳಿರಬಹುದೆಂದು ಊಹಿಸುತ್ತಾರೆ.

(ಸೌಜನ್ಯ: ಸೋವಿಯೆತ್ ಲೇಖನಮಾಲೆ)

# ಸೆಮ್ಮಾರಿಗೆ ಬಸ್ ಸೌಕರ್ಯ: ಒಂದು ಸಲಹೆ

ಶೃಂಗೇರಿಯಿಂದ ನೆಮ್ಮಾರಿಗೆ ಎರಡು ಬಸ್ಸು ಹಾಗೂ ನೆಮ್ಮಾರು ಮೂಲಕ ಕೆರೆಕಟ್ಟೆಗೆ ಒಂದು ಬಸ್ಸು ದಿನವಹಿ ಓಡಾಡುತ್ತಿವೆ. ಆದರೆ ಬೆಳಗಿನ ಬಸ್ಸಿನಲ್ಲಿ ಶೃಂಗೇರಿಗೆ ಬೆ. ೧೧-೩೦ಕ್ಕೆ ಬಂದರೆ ಮತ್ತೆ ಸುಮಾರು ೨ ಗಂಟೆ ಕಾಲ ಯಾವ ಮಾರ್ಗದಲ್ಲೂ ಮುಂದಿನ ಪ್ರಯಾಣಕ್ಕೆ ಬಸ್ಸಿಲ್ಲದೆ ಶೃಂಗೇರಿಯಲ್ಲೇ ಕಾಯಬೇಕಾಗುತ್ತದೆ. ಅಲ್ಲದೆ ಇತರೆ ಕೆಲಸಗಳನ್ನು ಮಾಡಿಕೊಂಡು ೧೨ ಗಂಟೆಯ ಬಸ್ಸಿಗೆ ಹೋಗಲೂ ಸಮಯ ಸಾಲುವುದಿಲ್ಲ.

ಆದ್ದರಿಂದ ಸಂಜೆ ೬ ಗಂಟೆಯ ಹೊತ್ತಿಗೆ ಶೃಂಗೇರಿ ಬಿಟ್ಟು ನೆಮ್ಮಾರು ಅಥವಾ ಕೆರೆಕಟ್ಟೆಯಲ್ಲಿ ತಂಗಿದ್ದು ವಾಪಸ್ಸು ಬೆಳಗ್ಗೆ ೯ ಗಂಟೆಗೆ ಶೃಂಗೇರಿಗೆ ತಲುಪುವಂತೆ ಒಂದು ಬಸ್ಸು ಓಡಿಸಿದರೆ **ಈ** ಭಾಗದ ಜನರಿಗೆ ಬಹಳ ಅನುಕೂಲವಾಗುತ್ತದೆ. ಶಂಕರ್ ಕಂಪನಿಯವರ ಬಸ್ಸುಗಳು ಹಳ್ಳಿ ಹಳ್ಳಿಗೂ ಹೋಗುವುದಲ್ಲದೆ ಒಂದು ವೇಳೆ ಬಸ್ಸು ಕೆಟ್ಟರೆ ಬೇರೆ ಬಸ್ಸು ಓಡಿಸುವ ವ್ಯವಸ್ಥೆಯೂ ಅವರಿಗೆ ಸಾಧ್ಯವಿದೆ. (ಈಗ ಹಾಗಿಲ್ಲ. ಒಂದು ಬಸ್ಸು ಕೆಟ್ಟರೆ ಅವತ್ತಿಗೆ ಆ ಓಡಾಟವೇ ರದ್ದಾಗಿ ಕಾದ ಜನರೆಲ್ಲ ಕಂಗೆಡುವಂತಾಗುತ್ತದೆ.)

ಶಂಕರ್ ಕಂಪನಿಯವರು ಈ ಬಗ್ಗೆ ಕೂಡಲೇ ಗಮನ ಹರಿಸಬೇಕೆಂದು ನೆಮ್ಮಾರು ಸುತ್ತು-ಮುತ್ತಿನ ಹತ್ತಾರು ಹಳ್ಳಿಗಳ ಜನ ಆಶಿಸಿದ್ದಾರೆ.

# ವಿದ್ಯಾರ್ಥಿಗಳಿಗೆ ಮುಳ್ಳಾದ ಚಿತ್ರಮಂದಿರದ ಧ್ವನಿವರ್ಧಕ

ಕೊಪ್ಪದ ಚಿತ್ರ ಮಂದಿರದಲ್ಲಿ ಹೊರಗಡೆ ಹಾಕಿರುವ ಧ್ವನಿವರ್ಧಕದಿಂದ ಕಿರಿಯ ಕಾಲೇಜಿನ ವಿದ್ಯಾರ್ಥಿಗಳಿಗೆ ಮಧ್ಯಾಹ್ನದ ಹೊತ್ತು ಪಾಠಕ್ಕೆ ವಿಪರೀತ ತೊಂದರೆಯಾಗುತ್ತಿದ್ದ ಸಮಸ್ಯೆ ಬಹಳ ಕಾಲದಿಂದ ಇದೆ. **ಈ** ಬಗ್ಗೆ ವಿದ್ಯಾರ್ಥಿಗಳು ಒಂದೆರಡು ಬಾರಿ ಪ್ರತಿಭಟಿಸಿಯೂ ಇದ್ದಾರೆ. ಕಳೆದ ಸಲ ವಿದ್ಯಾರ್ಥಿಗಳು ಚಿತ್ರ ಮಂದಿರದ ವ್ಯವಸ್ಥಾಪಕರನ್ನು ಕಂಡು ಚರ್ಚಿಸಿದ ಪರಿಣಾಮವಾಗಿ ಧ್ವನಿವರ್ಧಕವನ್ನು ಸ್ವಲ್ಪ ಬೇರೆ ದಿಕ್ಕಿಗೆ ತಿರುಗಿಸಿ **ಇಡಲಾಗಿತ್ತು**. ಆದರೆ ಸ್ವಲ್ಪ ಸಮಯದಲ್ಲೇ ಅದು ಮೊದಲಿನಂತೆ ತಿರುಗಿಕೊಂಡು ತೊಂದರೆ ಮುಂದುವರಿಸಿತ್ತು.

ಕಳೆದ ವಾರ ಕಾಲೇಜಿನಲ್ಲಿ ಪರೀಕ್ಷೆಗಳು ನಡೆದವು. ಆಗಂತೂ ವಿದ್ಯಾರ್ಥಿಗಳಿಗೆ ಪಡಬಾರದ ಕಷ್ಟವಾಯಿತು.

**ಈ** ಬಗ್ಗೆ ವಿದ್ಯಾರ್ಥಿಗಳಲ್ಲಿ ತೀವ್ರ ಕೋಪ ಹೊಗೆಯಾಡುತ್ತಿದ್ದು, 'ಮುಂಜಾವು' ಬಳಿನೂ ಹಲವು ದೂರುಗಳು ಬಂದಿದ್ದವು. ಚಿತ್ರ ಮಂದಿರದ ವ್ಯವಸ್ಥಾಪಕರ ಹತ್ತಿರ ಮಾ. ೭ರಂದು **ಈ** ಕುರಿತು ಚರ್ಚಿಸಿದಾಗ ಕೂಡಲೇ ಧ್ವನಿವರ್ಧಕವನ್ನು ಬೇರೆ ಕಡೆ ತಿರುಗಿಸಿ ಆದಷ್ಟು ಕಡಿಮೆ ಶಬ್ದ ಬಳಸಲು ವ್ಯವಸ್ಥೆ ಮಾಡಿದ್ದಾರೆ. ಆದರೆ ಧ್ವನಿವರ್ಧಕವನ್ನು ಪೂರ್ತಿ ತೆಗೆದು ಹಾಕಲು ಸಾಧ್ಯವಿಲ್ಲವೆಂದು ತಮ್ಮ ಅಸಹಾಯಕತೆ ವ್ಯಕ್ತಪಡಿಸಿದ್ದಾರೆ.

ತೀರ್ಥಹಳ್ಳಿಯ ವೆಂಕಟೇಶ್ವರ ಚಿತ್ರ ಮಂದಿರದವರು ಈಚಿಗೆ ಹೊರಗಿನ ಧ್ವನಿ ವರ್ಧಕವನ್ನು ತೆಗೆದು ಹಾಕಿರುವುದಾಗಿ ಪ್ರಕಟಿಸಿದ್ದಾರೆ. ಇದೊಂದು ಅಭಿನಂದನೀಯ ಕ್ರಮ. ವಾಸ್ತವವಾಗಿ ಧ್ವನಿವರ್ಧಕವನ್ನು ಕೇಳಿಯೇ ಜನ ಸಿನಿಮಾಕ್ಕೆ ಬರುವುದಿಲ್ಲ. (ಹತ್ತಿರದ ಕೆಲವರು ಹಾಗೆ ಮಾಡಬಹುದೇನೋ.) ಆದ್ದರಿಂದ ಧ್ವನಿವರ್ಧಕ ತೆಗೆದು ಹಾಕಿದರೆ ಚಿತ್ರ ಮಂದಿರದವರಿಗೆ ನಷ್ಟವೇನಿಲ್ಲ. ಹೊಸ ಕ್ರಮಕ್ಕೆ ಹೊಂದಿಕೊಳ್ಳಲು ನಾಲ್ಕು ದಿನ ಬೇಕಾಗಬಹುದು ಅಷ್ಟೆ. ಧ್ವನಿವರ್ಧಕವನ್ನು ಬೇರೆ ಕಡೆ ತಿರುಗಿಸಿಡುವುದು ಸಮಸ್ಯೆಗೆ ಶಾಶ್ವತ ಪರಿಹಾರವೇನಲ್ಲ. ಚಿತ್ರ ಮಂದಿರದ **ಮಾಲೀಕರು** ಈ ಬಗ್ಗೆ ಕೂಡಲೇ ಗಮನ ಹರಿಸುವುದು ಸೂಕ್ತ. **ಸಾರ್ವಜನಿಕ ಅಭಿಪ್ರಾಯಕ್ಕೆ ಅವರೆಷ್ಟು ಬೆಲೆ ಕೊಡುತ್ತಾರೆಂಬುದನ್ನು ಕಾದು ನೋಡಬೇಕು.**

# ಬಳಕೆದಾರರ ವೇದಿಕೆ - ಹಾಗೆಂದರೇನು?

(ಹಿಂದಿನ ಸಂಚಿಕೆಯಿಂದ)

**ವೇದಿಕೆ ಮತ್ತು ರಾಜಕೀಯ:** ಸಾಮಾನ್ಯವಾಗಿ ಎಲ್ಲ ಸಂಘಟನೆಗಳಿಗೂ ಅವುಗಳದ್ದೇ ಆದ ತಾತ್ವಿಕ ನಿಲುವು ಇರುತ್ತದೆ. ಈ ನಿಲುವಿನ ಕಾರಣದಿಂದಾಗಿ ಅದನ್ನೇ ಹೋಲುವ ನಿಲುವಿರುವ ರಾಜಕೀಯ ಪಕ್ಷದೊಂದಿಗೆ ಸಂಘಟನೆಗಳನ್ನು ಗುರುತಿಸಲಾಗುತ್ತದೆ. ಅಥವಾ, ಅದಕ್ಕಿಂತ ಮುಖ್ಯವಾಗಿ, ಸಂಘಟನೆಯೊಳಗಿನ ವ್ಯಕ್ತಿಗಳಿಂದಾಗಿ ಅದಕ್ಕೊಂದು ವಿಶಿಷ್ಟ ರಾಜಕೀಯ ಬಣ್ಣ ಬರುತ್ತದೆ. ಈ ರಾಜಕೀಯ ಬಣ್ಣದಿಂದಾಗಿ ಸಂಘಟನೆಯು ಕೆಲವರಿಗೆ ತುಂಬಾ ಹತ್ತಿರವಾದರೆ, ಮತ್ತೆ ಕೆಲವರಿಗೆ ಪೂರ್ತಿ ದೂರವಾಗುತ್ತದೆ.

ಇದೇ ಕಾರಣದಿಂದ ವೇದಿಕೆಯು ರಾಜಕೀಯ ವ್ಯಕ್ತಿಗಳನ್ನು ಸಂಪೂರ್ಣ ದೂರವಿಡುತ್ತದೆ. ವೇದಿಕೆಯು ಕಾರ್ಯಕಾರಿ ಸಮಿತಿಯ ಸದಸ್ಯರು ಯಾವುದೇ ರಾಜಕೀಯ ಪಕ್ಷದ ಹಾಲಿ ಸದಸ್ಯರಾಗಿರಕೂಡದು. (ಈ ನಿಯಮ ವೇದಿಕೆಯ ಸಾಮಾನ್ಯ ಸದಸ್ಯರಿಗಲ್ಲ. ಕಾರ್ಯಕಾರಿ ಸಮಿತಿ ಸದಸ್ಯರಿಗೆ ಮಾತ್ರ.) ಕೊನೇ ಪಕ್ಷ ಕಳೆದ ಐದು ವರ್ಷಗಳಿಂದೀಚೆಗೆ ರಾಜಕೀಯ ಪಕ್ಷಗಳ ಸದಸ್ಯತ್ವ ಬಿಟ್ಟವರಾಗಿರಬೇಕು. ವೇದಿಕೆಯ ಕಾರ್ಯಕಾರಿ ಸಮಿತಿಯಲ್ಲಿರುವಷ್ಟು ಕಾಲ ಅವರು ಯಾವ ರಾಜಕೀಯ ಪಕ್ಷವನ್ನೂ ಸೇರುವಂತಿಲ್ಲ; ಚುನಾವಣೆಗಳಲ್ಲಿ ಸ್ಪರ್ಧಿಸುವಂತಿಲ್ಲ. ಒಂದು ವೇಳೆ ಅವರು ಹಾಗೆ ಮಾಡಿದರೆ ಅವರ ವೇದಿಕೆಯ ಕಾರ್ಯಕಾರೀ ಸಮಿತಿಯ ಸದಸ್ಯತ್ವ ಕೂಡಲೇ ರದ್ದಾಗುತ್ತದೆ. ಮತ್ತು ಅಂಥವರು ತಾವು ವೇದಿಕೆಯಲ್ಲಿದ್ದು ಮಾಡಿದ ಕೆಲಸಗಳನ್ನು ತಮ್ಮ ಚುನಾವಣೆಗೆ ಬಂಡವಾಳ ಮಾಡಿಕೊಳ್ಳುವಂತಿಲ್ಲ. ಈ ಬಗ್ಗೆ ಒಂದು ಒಪ್ಪಂದಕ್ಕೆ ಅವರಿಂದ ಮೊದಲೇ ಸಹಿ ಪಡೆಯಲಾಗುತ್ತದೆ. ಒಪ್ಪಂದದ ಉಲ್ಲಂಘನೆಯಾದರೆ ವೇದಿಕೆ ಅದನ್ನು ಸಾರ್ವಜನಿಕವಾಗಿ ಪ್ರಕಟಿಸುತ್ತದೆ.

ವೇದಿಕೆ ಯಾರ ವಿರುದ್ಧವೂ ಅಲ್ಲ, ಪಕ್ಷತೆಯ ಪರವಾದುದು. ಪ್ರಾಮಾಣಿಕತೆ, ನಂಬಿಕೆ, ಕಾನೂನಿಗೆ ಗೌರವ, ನಿರುದ್ವಿಗ್ನವೂ ಸತತವೂ ಆದ ಪ್ರಯತ್ನ — ಇಂಥ ಮೌಲ್ಯಗಳು ವೇದಿಕೆಯ ಕಾರ್ಯವಿಧಾನದ ಅಡಿಗಲ್ಲುಗಳು.

(ಮುಗಿಯಿತು.)

## ಜಾಹೀರಾತಿಗೆ 'ಮುಂಜಾವು' ಅತ್ಯುತ್ತಮ ಮಾಧ್ಯಮ

### ಜನಸಂಖ್ಯೆ

ಪ್ರಚಂಡ ಮನುಷ್ಯರು ಸತ್ತು,
ಯಮಲೋಕದಲ್ಲಿ ಯಾವ ಶಿಕ್ಷೆಗೂ ಬಾಗದೆ,
ಹೆದರದೆ ಇರುವ ಈ ಗಟ್ಟಿ ಮನುಷ್ಯರ
ಬಗ್ಗೆ ಕೋಪಗೊಂಡ ಯಮನು,
ಚಿತ್ರಗುಪ್ತನ ಮೂಲಕ ಪುನಃ ಅವರನ್ನು
ಭೂ ಲೋಕಕ್ಕೆ ಅಟ್ಟಿಬಿಡುತ್ತಾನೆ.

ಮತ್ತೆ ಯಮನು ಯಾರನ್ನೂ ಕೊಂಡೊಯ್ಯದೆ
ಪ್ರಪಂಚದಲ್ಲೇ ಅವರನ್ನು ಸ್ಥಿರಗೊಳಿಸಿದಾಗ
ಸೂಜಿ ಮೊನೆಯಷ್ಟೂ ಜಾಗ ಸಿಕ್ಕದೆ
ಎಲ್ಲರೂ ಉಪ್ಪಿನಕಾಯಿಗಳಾಗುತ್ತಾರೆ.
ನಿರುದ್ಯೋಗ, ಆಹಾರ ಸಮಸ್ಯೆ ಶಾಶ್ವತವಾಗಿ
ಎಲ್ಲರೂ ಯಮನನ್ನು ಶಪಿಸುತ್ತಾರೆ.

**ಪುಷ್ಪಲತ ಎಸ್.** ಮೊದಲ ಬಿ.ಕಾಂ.

ಓದುಗರ ಪುಟ

# 'ಪಟ್ಟಭದ್ರ' ಪ್ರೇಕ್ಷಣೀಯ ಸ್ಥಳಗಳು; ಇಲಾಖೆಯ ತಲೆಕೆಳಗು ನೀತಿ!

ಈಚೆಗೆ 'ಮುಂಜಾವು'ನಲ್ಲಿ ಕಿಗ್ಗದ ಬಳಿಯ ರುದ್ರ-ರಮಣೀಯ ನರಸಿಂಹ ಪರ್ವತವನ್ನು ಪ್ರವಾಸಿ ಕೇಂದ್ರವಾಗಿ ಅಭಿವೃದ್ಧಿಪಡಿಸುವಂತೆ ಸೂಚಿಸುವ ಓದುಗರೊಬ್ಬರ ಪತ್ರ ಪ್ರಕಟವಾಗಿತ್ತು. ಇದೇ ಸಂದರ್ಭದಲ್ಲಿ ಪ್ರವಾಸೋದ್ಯಮ ಇಲಾಖೆ ಮೈಸೂರು, ಶ್ರೀರಂಗಪಟ್ಟಣ, ಸೋಮನಾಥಪುರ ಮುಂತಾದ ಪ್ರೇಕ್ಷಣೀಯ ಸ್ಥಳಗಳ ಅಭಿವೃದ್ಧಿಗೆ ಕೆಲವು ಲಕ್ಷವೋ ಕೋಟಿಯೋ ಖರ್ಚು ಮಾಡಲು ನಿರ್ಧರಿಸಿದೆಯೆಂದು ಸುದ್ದಿಯಾಗಿದೆ (ಮಾ.೬)

ಇದರ ಅರ್ಥ ಹೀಗೆ: ಈ ಮೇಲಿನ ಕೆಲವು ಸ್ಥಳಗಳು ಪ್ರವಾಸೋದ್ಯಮ ರಂಗದ "ಪಟ್ಟಭದ್ರ"ರಾಗಿಬಿಟ್ಟಿವೆ. ಸರ್ಕಾರ "ಪ್ರವಾಸೋದ್ಯಮದ ಅಭಿವೃದ್ಧಿಗೆ" ಖರ್ಚು

(೬ನೇ ಪುಟಕ್ಕೆ)

## ಬೀದಿಬದಿಯ ವ್ಯಾಪಾರಕ್ಕೆ ಮರುಳಾಗುವ ಜನ

ಅಂದು ಸ್ವಾತಂತ್ರ್ಯ ಪೂರ್ವ ಭಾರತೀಯರು ಹೆಡ್ಡರು, ದಡ್ಡರು, ಬರೇ ಅನಕ್ಷರಸ್ಥರು ಮುಂತಾದವುಗಳಾಗಿದ್ದುದೇನೋ ನಿಜ. ಆದರೆ ಇಂದು ನಾವು ಜಗತ್ತಿನಲ್ಲಿ ೫ನೇ ಮುಂದುವರಿದ ರಾಷ್ಟ್ರದವರಾಗಿದ್ದೇವೆ ಎಂಬುದನ್ನು ಇತರ ದೇಶದವರು ಬೊಟ್ಟುಮಾಡಿ ತೋರಿಸುತ್ತಾರೆ. ಅದೇ ಹೆಮ್ಮೆಯಿಂದ ನಮ್ಮನ್ನರಿಂದಲೇ ನಾವು ಇನ್ನೂ ದಡ್ಡರಾಗಿದ್ದೇವೆ. ಏಕೆಂದರೆ, ಬೀದಿಯಲ್ಲಿ ಮಾರಾಟಕ್ಕೆ ಬರುವ ಔಷಧ, ಬಟ್ಟೆ, ನೇಪಾಳದ ಕೃಷ್ಣಮೃಗದ ಕಸ್ತೂರಿ, ಪ್ರಭಾವ ಬೀರುವ ಉಂಗುರ, ತಂತ್ರ-ಮಂತ್ರ-ಭವಿಷ್ಯ, ಸ್ಟೀಲ್ ಪಾತ್ರೆ-ಉಲ್ಲನ್ ಬಟ್ಟೆ - ಹರಾಜಿನ ಬಟ್ಟೆ ಮುಂತಾದುವು ಬೀದಿ ಬದಿಯ ವ್ಯಾಪಾರವಾದರೆ, ಸ್ವಲ್ಪ ದೊಡ್ಡ ಪ್ರಮಾಣದ "ರಿಡಕ್ಷನ್ ಸೇಲ್", "೫೦ ಡಿಸ್ಕೌಂಟ್ ಸೇಲ್" ಮುಂತಾದುವೂ ಹೊರ ರಾಜ್ಯದ ವ್ಯಾಪಾರಿಗಳ ಒಂದು ಬಗೆ ಪಡಪೋಶಿಯೇ. ನಮ್ಮ ಖಾಯಂ ಅಂಗಡಿಗಳವರು ಬಹುಮಾನದ ಘೋಷಣೆ ಮುಂತಾದ ಆಮಿಷ ತೋರಿಸಿ ಜನರ ಮರುಳು ಎಲ್ಲೆಲ್ಲೂ ತಾಂಡವವಾಡುತ್ತಿದೆ.

೧೯೬೫ರ ವರೆಗೆ ವಾಣಿಜ್ಯ ಬ್ಯಾಂಕುಗಳಲ್ಲಿ ತಮ್ಮ ಗಿರಾಕಿಗಳಿಗೆ ಡೈರಿ, ಕ್ಯಾಲೆಂಡರ್, ಪೆನ್ನು, ಪರ್ಸು, ಹ್ಯಾಂಡ್ ಬ್ಯಾಗು— ಹೀಗೆ ಹಲವಾರು ವಸ್ತುಗಳನ್ನು ಕೊಟ್ಟು ಆಕರ್ಷಿಸುತ್ತಿದ್ದರು. ೧೯೬೬ರಲ್ಲಿ ರಿಸರ್ವ್ ಬ್ಯಾಂಕ್ ಇದಕ್ಕೆಲ್ಲ ನಿಷೇಧ ಹೇರಿತು. ಹಾಗೆಯೇ ಈ ಮೋಸದ ವ್ಯವಹಾರಕ್ಕೆ ಸರಕಾರ ಕೂಡಲೇ ತಡೆ ನೀಡಬೇಕು. ಬರೇ ಅಧಿಕಾರಿಗಳಿಗೆ ಮಾತ್ರ ಭ್ರಷ್ಟತೆಗಾಗಿ ತಡೆನೀಡುವುದಲ್ಲ. ಎಲ್ಲಾ ಸಾರ್ವಜನಿಕ ವ್ಯವಹಾರದಲ್ಲೂ ಆಮಿಷಕ್ಕೆ ಬಲಿಯಾಗುವುದಕ್ಕೆ ತಡೆ ನೀಡಬೇಕು. ಸ್ಥಳೀಯ ಎಂ. ಎಲ್. ಎ.ಗಳು ಇದನ್ನು ಗಮನಿಸಿ ಬರುವ ವಿಧಾನ ಸಭಾ ಅಧಿವೇಶನದಲ್ಲಿ ಈ ವಿಚಾರವನ್ನು ಎತ್ತಿ ಸೂಕ್ತ ಪರಿಹಾರವನ್ನು ಜನತೆಗೆ ನೀಡಬೇಕು ಎಂತ ಸಾರ್ವಜನಿಕವಾಗಿ ಕೇಳಿಕೊಳ್ಳುತ್ತೇನೆ. ಹಾಗೂ ಸಾರ್ವಜನಿಕರು ಇದನ್ನು ಗಮನಿಸಿ ಎಲ್ಲಿ ಪ್ರಾಮಾಣಿಕ ವ್ಯವಹಾರವಿದೆಯೋ ಅಲ್ಲಿ ವ್ಯವಹರಿಸಿದರೆ ಈ ವ್ಯವಹಾರ ತನ್ನಿಂದ ತಾನೇ ನಿಲ್ಲುತ್ತದೆ.

—ಎಂ. ನರಹರಿ ನಾಯಕ್,
ಕುದುರೆಗುಂಡಿ.

## ದೇವಸ್ಥಾನಗಳಿಗೆ ತಸ್ತೀಕು: ಆಕ್ಷೇಪ ಹೊತ್ತು ಸುತ್ತುತ್ತಿರುವ ಫೈಲುಗಳು

ಮಾನ್ಯರೆ,

ಚಿಕ್ಕಮಗಳೂರು ಜಿಲ್ಲಾ ಕೊಪ್ಪ ತಾಲ್ಲೂಕಿನಲ್ಲಿ ಮುಜರಾಯಿ, ಇನಾಂ, ಮತ್ತು ಖಾಸಗಿ ಆಡಳಿತವಿರುವ ನೂರಾರು ದೇವಸ್ಥಾನಗಳಿವೆ. ಈ ದೇವಸ್ಥಾನಗಳಿಗೆ ಇದ್ದ ಜಮೀನುಗಳು ಇನಾಂ ರದ್ದಿಯಾತಿ ಮತ್ತು ಭೂ ಸುಧಾರಣಾ ಕಾನೂನುಗಳಿಂದ ಗೇಣಿದಾರರಿಗೆ ಹೋಗಿವೆ. ೧೯೭೪ರಿಂದಲೂ ದೇವಸ್ಥಾನಗಳಿಗೆ ಉತ್ಪತ್ತಿ ಇಲ್ಲ.

ಈ ದೇವಸ್ಥಾನಗಳಿಗೆ ಕಾನೂನಿನಂತೆ ತಸ್ತೀಕು ಹಣವನ್ನು ಸರ್ಕಾರದವರು ಕೊಡಬೇಕಾಗಿತ್ತು. ಕೇವಲ ೫೯ ದೇವಸ್ಥಾನಗಳಿಗೆ ೧೯೮೦ರಲ್ಲಿ ಅಲ್ಪಸ್ವಲ್ಪ ಹಣವನ್ನು ಕೊಟ್ಟಿರುತ್ತಾರೆ. ಇನ್ನೂ ನೂರಾರು ದೇವಸ್ಥಾನಗಳಿಗೆ ಹಣವನ್ನು ಕೊಟ್ಟಿಲ್ಲ.

ಈಗ ಸರ್ಕಾರದವರು ಈ ಬಗ್ಗೆ ತಾಲ್ಲೂಕಿಗೆ ಹಣವನ್ನು ಒದಗಿಸಿರುತ್ತಾರೆಂದು ತಿಳಿದು ಬಂದಿರುತ್ತದೆ. ಆದರೆ ದೇವಸ್ಥಾನಗಳಿಗೆ ಸಂಬಂಧಪಟ್ಟ ರಿಕಾರ್ಡ್ ನಾನಾ ರೀತಿಯ ಆಕ್ಷೇಪಗಳೊಂದಿಗೆ ತಹಸೀಲ್ದಾರರು, ಜಿಲ್ಲಾಧಿಕಾರಿಗಳು ಮತ್ತು ಮುಜರಾಯಿ ಕಮಿಷನರ್‌ರವರ ಕಛೇರಿಗಳಿಗೆ ಸುತ್ತುತ್ತಿವೆ. ಕಳೆದ ವರ್ಷವೂ ಹೀಗೆಯೇ ಆಗಿ ಅರ್ಚಕರಿಗೆ ಹಣ ದೊರೆಯಲಿಲ್ಲ.

ಈಗ ವರ್ಷದ ಆಖೈರು ಸಮೀಪಿಸುತ್ತಿದೆ. ಈಗಲೂ ಸಂಬಂಧಪಟ್ಟ ಬಿಲ್ಲುಗಳು ಮಂಜೂರಾಗಿ ದೇವಸ್ಥಾನಗಳಿಗೆ ಹಣ ದೊರಕದೇ ಇದ್ದಲ್ಲಿ ತಾಲ್ಲೂಕಿಗೆ ಒದಗಿಸಿದ ಹಣ ವಾಪಸ್ ಆಗುತ್ತದೆ. ಅರ್ಚಕರಿಗೆ ದೊರೆಯುವುದಿಲ್ಲ. ಅವರ ಕಷ್ಟ ಪರಿಸ್ಥಿತಿ ಸುಧಾರಿಸುವುದೂ ಇಲ್ಲ. ಹೀಗೆ **ಅದಲ್ಲಿ ದೇವಸ್ಥಾನಗಳಿಗೆ ಬೀಗ ಹಾಕಿ ಅರ್ಚಕರು ಬೀಗದ ಕೈಯನ್ನು ಸಂಬಂಧಪಟ್ಟ ಅಧಿಕಾರಿಗಳಿಗೆ ವಹಿಸುವ ತೀರ್ಮಾನಕ್ಕೆ ಬಂದಿರುತ್ತಾರೆ.**

ಸಂಬಂಧಪಟ್ಟ ಅಧಿಕಾರಿಗಳು ಈ ಮಾರ್ಚಿಯೊಳಗಾದರೂ ತಸ್ತೀಕು ಹಣವೆಲ್ಲವನ್ನೂ ಕೊಡುವಂತೆ ವ್ಯವಸ್ಥೆ ಮಾಡಬೇಕೆಂದು ಮನವಿ ಮಾಡುತ್ತೇನೆ.

**—ಎನ್.ಎಸ್. ನಾಗೇಂದ್ರ ಭಟ್ಟ,**
ಕಾರ್ಯದರ್ಶಿ, ಕೊಪ್ಪ ತಾಲ್ಲೂಕು ಧಾರ್ಮಿಕ ಸಂಸ್ಥೆಗಳ ಸಂಚಾಲಕರ ಸಮಿತಿ,

## ಒಂಟಿ ದುಬ್ಬಿ ಒಡೆದು ನೀರು ಕುಡಿದಂಥ ದುಃಸ್ಥಿತಿ

ಜೋಮ್ಲಾಪುರ ಗ್ರಾಮದಲ್ಲಿ ೧೧೦ ಜನತಾ ಮನೆಗಳು ಇರುವ ಕಡೆ ಒಂದೂ ಕುಡಿಯುವ ನೀರಿನ ಕೆರೆದ ಬಾವಿ ಇಲ್ಲದೆ ಇಲ್ಲಿನ ನಿವಾಸಿಗಳು ಪಡುವ ಪಾಡು ಎಂದರೆ ಮರು ಭೂಮಿಗಳಲ್ಲಿ ಒಂಟೆಯ ದುಬ್ಬವನ್ನು ಒಡೆದು ಅದರ ನೀರು ಸೇವನೆ ಮಾಡಿ ಮಾನವ ಜೀವ ಉಳಿಸಿಕೊಂಡಷ್ಟೇ ದುಃಸ್ಥಿತಿಯದಾಗಿದೆ. ಇದರಿಂದ ನೊಂದ ಜನತೆ ಈ ವಿಚಾರದ ಬಗ್ಗೆ ಈಗ್ಯೆ ಸುಮಾರು ೩-೪ ವರ್ಷಗಳಿಂದ ಸಂಬಂಧಪಟ್ಟಿರುವ ತಾಲ್ಲೂಕ್ ಬೋರ್ಡಿಗೂ ಮತ್ತು ಶಾಸಕರಾದ ಬೇಗಾನೆಯವರಿಗೂ ತಿಳಿಸಿರುತ್ತಾರೆ. ಆದರೆ ಈ ವರೆಗೂ ಬರಿಯ ಬೇಡಿಕೆಯೊಂದೇ ಉಳಿದಿರುತ್ತದೆ.

(೬ನೇ ಪುಟಕ್ಕೆ)

## ನೀರಿನ ಕಾಲುವೆ ತಾವೇ ತೆಂಗಿ ನೀರಿಗಾಗಿ ಸರ್ಕಾರದೆಡೆ ಕೈ ತೋರುವವರು

ಮಾನ್ಯರೆ,

೬.೧.೮೩ರ 'ಮುಂಜಾವು'ನಲ್ಲಿ ಪ್ರಕಟವಾದ ಪತ್ರದಲ್ಲಿ "ಹುಲ್ಗಾರು ಕೆ.ಎಂ.ಕೆ" ಲೇಖಕರು ಬರೆದಿರುವಂತೆ ನಮ್ಮ ಊರು ರಸ್ತೆ, ದೀಪ, ನೀರುಗಳನ್ನು ಕಾಣದೆ ಸರ್ಕಾರದ ಎಲ್ಲಾ ಸೌಲಭ್ಯಗಳಿಂದ ವಂಚಿತವಾಗಿರುವುದು ನಿಜ. ಆದರೆ ಲೇಖಕರು "ಈ ಊರು ಕುಡಿಯುವ ನೀರೂ ಇಲ್ಲದ ಕೊಂಪೆಯಾಗಿರಬೇಕೆ?" ಎಂದು ಬರೆಯುವಾಗ ಸ್ವಲ್ಪ ಯೋಚಿಸಬೇಕಾಗಿತ್ತು. **ತಾವೇ ಸ್ವತಃ ಈ** ಊರಿನ ಏಕೈಕ ನೀರಿನ ಆಶ್ರಯವಾಗಿದ್ದ ಕೆರೆಯ ಕಾಲುವೆಯನ್ನು ತೆಂಗಿ ಅದರ ಸರ್ಲಿನ ಮೂಲಕ ತಮ್ಮ ಮನೆಗೊಂದೇ ಪೂರ್ಣ ನೀರನ್ನು ಬಳಸಿಕೊಳ್ಳುತ್ತಿದ್ದು ನಮ್ಮಂತಹ ಬಡಪಾಯಿಗಳ ತೋಟವನ್ನೂ ಸುಟ್ಟುಬಾವಿಯನ್ನೂ ಬತ್ತಿ ಹೋಗುವಂತೆ ಮಾಡಿದ ಹುಲ್ಗಾರು ಕೆ. ಮೂರ್ತಿಯವರು ಸರ್ಕಾರದತ್ತ ಕೈ ತೋರಿಸುವುದು ವಿಷಾದಕರ.

ಗ್ರಾಮಸ್ಥರ ಪರವಾಗಿ,
**—ಹುಲುಗಾರು ಸಹೋದರರು.**

ಈ ಪತ್ರಕ್ಕೆ ಹುಲುಗಾರು ಕೆ.ಮೂರ್ತಿ ಅವರ ಪ್ರತಿಕ್ರಿಯೆ ಇಲ್ಲಿದೆ:—

ಮಾನ್ಯ ಸಂಪಾದಕರೆ,

ನೀವು ಸ್ಪಷ್ಟನೆ ಕೇಳಿ ಬರೆದಿದ್ದಕ್ಕಾಗಿ ವಂದನೆಗಳು. ಹುಲುಗಾರು ಸಹೋದರರು ಯಾರು ಎಂದು ನನಗೆ ಸ್ಪಷ್ಟವಾಗಿಲ್ಲ. ಆದರೂ ನೀವು ಅಭಿಮಾನದಿಂದ ಕಳುಹಿಸಿದ ಪತ್ರಕ್ಕೆ ಉತ್ತರಿಸುತ್ತಿದ್ದೇನೆ.

ನಾನಾಗಲೀ ನಮ್ಮ ಕುಟುಂಬದವರಾಗಲೀ ಸರ್ಕಾರಿ ಜಾಗದಲ್ಲಿ ಹರಿಯುವ ನೀರಿಗೆ ಯಾವುದೇ ತರಹ ಅಡೆ ತಡೆಯನ್ನು ಮಾಡಿಲ್ಲ. ಸದರಿಯವರು ಮಾಡಿರುವ ಆರೋಪ ವೈಯಕ್ತಿಕ ದ್ವೇಷದಿಂದ ಕೂಡಿದ್ದು. ಈ ಊರಿನಲ್ಲಿ ಸರ್ಕಾರಿ ಜಾಗದಲ್ಲಿ ಯಾವ ಕೆರೆಯೂ ಇಲ್ಲ. ನಮ್ಮ ಸ್ವಂತ ಜಾಗದಲ್ಲಿ ಅದೂ ನಾವು ಕಂದಾಯ ಕೊಡುವ ಭೂಮಿಯಲ್ಲೇ ಹುಟ್ಟುವ ನೀರಿನ ಚಿಲುಮೆಯನ್ನು ನಾವು ಉಪಯೋಗಿಸಿಕೊಳ್ಳುತ್ತಿದ್ದೇವೆಯೇ ಹೊರತು ಸರ್ಕಾರಿ ಜಾಗದಲ್ಲಿ ಹರಿಯುವ ನೀರಿಗೆ ನಾವು ಯಾವುದೇ ತರಹನಾದ ಅಡೆ ತಡೆಗಳನ್ನೂ ಮಾಡಿಲ್ಲ. ಇದು ಹುಲುಗಾರು ಸಹೋದರರು ಎಂದು ಹೇಳಿಕೊಳ್ಳುವ ವ್ಯಕ್ತಿ ವೈಯಕ್ತಿಕ ದ್ವೇಷದಿಂದ ಮಾಡಿರುವ ಅಪವಾದವೇ ಹೊರತು, ಇದು ಸತ್ಯಕ್ಕೆ ದೂರವಾದ ಅಪವಾದ. ಒಂದು ಪತ್ರಿಕೆಯನ್ನು ಕೇವಲ ವೈಯಕ್ತಿಕ ದ್ವೇಷ ಸಾಧನೆಗೆ ಉಪಯೋಗಿಸಿಕೊಳ್ಳುವುದು ಸರಿಯಲ್ಲ. ಆದ್ದರಿಂದ ಈ ಬಗ್ಗೆ ಹೆಚ್ಚು ಪತ್ರ ವ್ಯವಹಾರಕ್ಕೆ ನಾನು ಇಷ್ಟಪಡುವುದಿಲ್ಲ.

ಸಂಪಾದಕರು ಇನ್ನು ಮುಂದೆ ಇಂತಹ ವೈಯಕ್ತಿಕ ದೋಷಾರೋಪಣೆಯ ಪತ್ರಗಳಿಗೆ ಗಮನ ಕೊಡದೆ ಸಾರ್ವಜನಿಕರಿಗೆ ಉಪಯೋಗವಾಗುವಂತಹ ಪತ್ರಗಳಿಗೆ ಗಮನ ಹರಿಸಿ ಪ್ರಕಟಿಸಿದರೆ ಜನತೆಗೆ ತುಂಬಾ ಅನುಕೂಲವಾದೀತು.

ಹುಲುಗಾರು **ಕೆ. ಮೂರ್ತಿ**

## ಕೊಪ್ಪದಲ್ಲಿ ಕಲಾತ್ಮಕ ಚಿತ್ರಗಳಿಗೆ 'ಬರ'!

ಸ್ವಾಮಿ,

ಕೊಪ್ಪದಲ್ಲಿ ಪಕ್ಕದ ಊರಿನವರು ಅಸೂಯೆ ಪಡುವಂತಹ ಸಿನಿಮಾ ಥಿಯೇಟರ್ ಇದೆ. ಆದರೆ ಈ ಅಸೂಯೆ ಅಷ್ಟಕ್ಕೇ ನಿಲ್ಲುವುದು ನಮ್ಮ ದುರ್ದೈವ. ಕಲಾತ್ಮಕ, ಹೊಸ ಅಲೆಯ ಚಿತ್ರಗಳು ಹಾಗಿರಲಿ, ಉತ್ತಮ ಅಭಿರುಚಿಯ ಚಿತ್ರಗಳು ಅಪರೂಪವಾಗಿವೆ. ಉದಾಹರಣೆಗೆ ಕಳೆದ ವರ್ಷವನ್ನು ತೆಗೆದುಕೊಂಡರೆ, ಉತ್ತಮ ಅಭಿರುಚಿಯ ಕನ್ನಡ ಚಿತ್ರ ನಮ್ಮ ಚಿತ್ರಮಂದಿರಕ್ಕೆ ಬಂದಿರುವುದು "ರಂಗ ನಾಯಕಿ" ಯೊಂದೇ! ಈ ಸ್ಥಿತಿಗೆ ಬಹುಶಃ ಪ್ರಸಕ್ತ ಆಡಳಿತ ವರ್ಗವೇ ಕಾರಣ ವೆನ್ನಬಹುದೇನೋ. (ಹಿಂದಿನ ಆಡಳಿತ ವರ್ಗ ಪ್ರದರ್ಶಿಸಿದ "ಚೋಮನದುಡಿ" "ತಬ್ಬಲಿಯು ನೀನಾದೆ ಮಗನೇ" "ಒಂದಾನೊಂದು ಕಾಲದಲ್ಲಿ" ಇತ್ಯಾದಿ ಗಮನಿಸಿ.) ನೆರೆಹೊರೆಯ ಟೆಂಟುಗಳು ಕೂಡಾ 'ಮಾನಸ ಸರೋವರ', 'ಬರ' ಇತ್ಯಾದಿ ಚಿತ್ರಗಳನ್ನು ಪ್ರದರ್ಶಿಸಿವೆಯಾದರೆ ನಮ್ಮ ಈ ಚಿತ್ರಮಂದಿರಕ್ಕೆ ಕಲಾತ್ಮಕ ಚಿತ್ರಗಳ 'ಬರ' ಬಂದಿರುವುದು ಹಾಸ್ಯಾಸ್ಪದ ಹಾಗೂ ಶೋಚನೀಯ. ಈ ಚಿತ್ರಮಂದಿರ ಪ್ರದರ್ಶಿಸುವ ಹಿಂದೀ ಚಿತ್ರಗಳ ಬಗ್ಗೆ ಕೂಡಾ ಹೆಚ್ಚಿನದೇನನ್ನೂ ಹೇಳಬೇಕಾಗಿಲ್ಲ.

ಇನ್ನಾದರೂ ಸಂಬಂಧಪಟ್ಟವರು ಉತ್ತಮ ಚಿತ್ರಗಳನ್ನು ತರಿಸುವರೆಂದು ಆಶಿಸೋಣವೇ?

"(ಸು) ಚಿತ್ರ ಪ್ರೇಮಿ",
ಮೇಲಿನಪೇಟೆ, ಕೊಪ್ಪ.

'ಮುಂಜಾವು'
ಚಂದಾ ದರ: ಆಜೀವ ಚಂದಾ ೨೦೦ರೂ.
ವಾರ್ಷಿಕ ಚಂದಾ ೨೦ರೂ.

## ರಾ. ಸ್ವ. ಸಂಘದ ಶಿಬಿರ

ಕೊಪ್ಪ: ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಕೊಪ್ಪ, ನ.ರಾ.ಪುರ ತಾ॥ಗಳ ಆಯ್ದ ತರುಣ ಸ್ವಯಂ ಸೇವಕರ ಶಿಬರ ಇಲ್ಲಿ ಫೆ. ೧೯, ೨೦ರಂದು ನಡೆಯಿತು. ಸಮಾರೋಪ ಸಮಾರಂಭದಲ್ಲಿ ಶಿವಮೊಗ್ಗ ವಿಭಾಗ ಪ್ರಚಾರಕ ಸೀತಾರಾಮ ಕೆದಿಲಾಯ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಸಮಾರಂಭಕ್ಕೆ ಮುನ್ನ ಪೇಟೆಯ ಮುಖ್ಯ ಬೀದಿಗಳಲ್ಲಿ ಘೋಷಸಹಿತ ಆಕರ್ಷಕ ಮೆರವಣಿಗೆ ನಡೆಯಿತು.

## ಸಹಕಾರಿಬ್ಯಾಂಕುಗಳಿಂದ ಹೆಚ್ಚಿನಸೇವೆಸಾಧ್ಯ

—ನಾರಾಯಣಗೌಡ.

(ನಮ್ಮ ಪ್ರತಿನಿಧಿಯಿಂದ)

ಹರಿಹರಪುರ: "ಜನರ ಕಷ್ಟ ಅಂತ ಪ್ರತಿನಿಧಿಗಳೇ ಆಡಳಿತ, ನಿರ್ವಹಣೆ ನಡೆಸುವ ಈ ಸಹಕಾರಿ ಬ್ಯಾಂಕುಗಳು ಜನ ಸಾಮಾನ್ಯರಿಗೆ ವಾಣಿಜ್ಯ ಬ್ಯಾಂಕುಗಳಿಗಿಂತ ಹೆಚ್ಚಿನ ಸೇವೆ ಸಲ್ಲಿಸಬಲ್ಲವು. ಹೀಗಾಗಲು ಅಧಿಕಾರಿ–ನೌಕರ ವರ್ಗ ಪ್ರಾಮಾಣಿಕವಾಗಿ, ವಿನಯದಿಂದ ಕೆಲಸ ಮಾಡುವುದು ಅಗತ್ಯ" ಎಂದು ಚಿಕ್ಕಮಗಳೂರು ಶಾಸಕ ಹೆಚ್. ಎ. ನಾರಾಯಣ ಗೌಡ ಇಲ್ಲಿ ಮಾ. ೭ರಂದು ಡಿಸಿಸಿ ಬ್ಯಾಂಕಿನ ಶಾಖೆ ಪ್ರಾರಂಭೋತ್ಸವದಲ್ಲಿ ಮುಖ್ಯ ಅತಿಥಿಗಳಾಗಿ ಮಾತನಾಡುತ್ತ ತಿಳಿಸಿದರು.

ಶಾಸಕ ಹೆಚ್.ಜಿ.ಗೋವಿಂದ ಗೌಡರ ಅಧ್ಯಕ್ಷತೆಯಲ್ಲಿ ಇಲ್ಲಿನ ಮಠಾಧೀಶರು ಶಾಖೆ ಉದ್ಘಾಟಿಸಿದರು. ಡಿಸಿಸಿ ಬ್ಯಾಂಕ್ ಅಧ್ಯಕ್ಷ ಟಿ.ಡಿ. ರಾಮಚಂದ್ರಪ್ಪ ಸ್ವಾಗತಿಸಿ, ಜೆ.ಪಿ.ನೀಲಕಂಠಭಟ್ಟ ವಂದಿಸಿದರು.

## ಭಾಜಪಾ ಅಧ್ಯಕ್ಷರಾಗಿ ಸುಂದರ ಶೆಟ್ಟಿ

ಶೃಂಗೇರಿ: ಫೆ. ೨೮ರಂದು ಜಿಲ್ಲಾ ಭಾಜಪಾ ಉಪಾಧ್ಯಕ್ಷ ಶ್ರೀಕಂಠ ಭಟ್ಟರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಹೆಚ್. ಕೆ. ಸುಂದರ ಶೆಟ್ಟಿ (ಅಧ್ಯಕ್ಷ), ಯು.ಎಸ್. ಶ್ರೀಧರ್ (ಕಾರ್ಯದರ್ಶಿ), ಜಿ.ಎಸ್.ಕವೀಶ (ಸಹಕಾರ್ಯದರ್ಶಿ) ಹಾಗೂ ಸುರೇಶ ಕಾಮತ್, ಚಂದ್ರಶೇಖರ್, ಕೃಷ್ಣ ಶೆಟ್ಟಿ, ಶಿವಶಂಕರ್, ಸತೀಶ್, ರಾಮಸ್ವಾಮಿ, ವೆಂಕಟ ಸುಬ್ಬಯ್ಯ ಶೆಟ್ಟಿ, ಶಿವರಾಮ್ (ಸದಸ್ಯರು) ಇವರುಗಳು ಶೃಂಗೇರಿ ನಗರ ಸಮಿತಿಗೆ ಆಯ್ಕೆಯಾಗಿದ್ದಾರೆ.

## ಏಲಕ್ಕಿ ಬೇಸಾಯದ ಬಗ್ಗೆ ವಿಚಾರ ಸಂಕಿರಣ

ಅಡ್ಡಗದ್ದೆ: ಕೃಷಿ ವಿಶ್ವವಿದ್ಯಾನಿಲಯ, ತೋಟಗಾರಿಕೆ ಇಲಾಖೆ ಹಾಗೂ ಕಾನಡಿ ಗ್ರಾಮ ಪಂಚಾಯ್ತಿಗಳ ಸಂಯುಕ್ತ ಆಶ್ರಯದಲ್ಲಿ ಏಲಕ್ಕಿ ಬೇಸಾಯದ ಬಗ್ಗೆ ವಿಚಾರ ಸಂಕಿರಣವೊಂದನ್ನು ಇಲ್ಲಿ ಈಚೆಗೆ ತಾ. ಅ.ಸಂ. ಅಧ್ಯಕ್ಷ ಡಿ.ಕಳಸಪ್ಪ ಹೆಗ್ಡೆ ಅವರ ಅಧ್ಯಕ್ಷತೆಯಲ್ಲಿ ಏರ್ಪಡಿಸಲಾಗಿತ್ತು.

ಮುಖ್ಯ ಅತಿಥಿಗಳಾಗಿದ್ದ ಮೂಡಿಗೆರೆಯ ಪ್ರಾದೇಶಿಕ ಸಂಶೋಧನಾ ಕೇಂದ್ರದ ಮುಖ್ಯ ವೈಜ್ಞಾನಿಕ ಅಧಿಕಾರಿ ಡಾ॥ ಹೆಚ್. ಎನ್. ಪಟ್ಟಣಶೆಟ್ಟಿ ಹಾಗೂ ಅವರ ತಂಡ ಏಲಕ್ಕಿ ಬೇಸಾಯದಲ್ಲಿ ಸಸಿ ಬೆಳೆಸುವ ವಿಧಾನ, ಅಧಿಕ ಇಳುವರಿ ತಳಿಗಳು, ಆಧುನಿಕ ಬೇಸಾಯ ಪದ್ಧತಿ, ಸಸ್ಯ ಸಂರಕ್ಷಣೆಗಳ ಬಗ್ಗೆ ರೈತರಿಗೆ ವಿವರವಾದ ಮಾಹಿತಿ ನೀಡಿದರು.

ಏಲಕ್ಕಿ ಮಂಡಳಿಯ ಕೊಪ್ಪ ಕ್ಷೇತ್ರಾಧಿಕಾರಿ ಜಯರಾಂ ಮಂಡಳಿಯಿಂದ ಬೆಳೆಗಾರರಿಗೆ ಸಿಗುವ ಸವಲತ್ತುಗಳನ್ನು ವಿವರಿಸಿದರು.

ಕೃಷಿ ವಿ.ವಿ.ವಿಸ್ತರಣ ಮಾರ್ಗದರ್ಶಿ ಕೆ. ಎಂ.ಇಂದಿರೇಶ್ ಸ್ವಾಗತಿಸಿ, ಪಂಚಾಯ್ತಿ ಕಾರ್ಯದರ್ಶಿ ಎಂ.ಪಿ.ಕೃಷ್ಣಪ್ಪ ವಂದಿಸಿದರು.

## ಜೆ.ಸಿ.ಬಿ.ಎಂ. ಕಾಲೇಜು ವಾರ್ಷಿಕೋತ್ಸವ

ಶೃಂಗೇರಿ: ಇಲ್ಲಿನ ಜೆ. ಸಿ. ಬಿ. ಎಂ. ಕಾಲೇಜಿನ ವಿದ್ಯಾರ್ಥಿ ಸಂಘದ ಸಮಾರೋಪ ಸಮಾರಂಭ, ಸಾಂಸ್ಕೃತಿಕ ಸಂಜೆ ಹಾಗೂ ವಾರ್ಷಿಕೋತ್ಸವ ಸಮಾರಂಭಗಳು ಫೆ. ೨೬, ೨೭ಮತ್ತು ೨೮ರಂದು ನಡೆದವು.

೨೮ರಂದು ನಡೆದ ವಾರ್ಷಿಕೋತ್ಸವ ಸಮಾರಂಭದಲ್ಲಿ ಮುಖ್ಯ ಅತಿಥಿಯಾಗಿದ್ದ ಮೈಸೂರು ಯುವರಾಜ ಕಾಲೇಜು ಸಸ್ಯಶಾಸ್ತ್ರ ವಿಭಾಗದ ಮುಖ್ಯಸ್ಥ ಪ್ರೊ॥ ಶ್ರೀಕಂಠ ಅವರು, "ನಮ್ಮ ದೇಶದಲ್ಲಿ ಸಸ್ಯ ಸಂಪತ್ತಿನ ರಕ್ಷಣೆಯ ವಿಷಯದಲ್ಲಿ ಆಡುವುದೊಂದು, ಮಾಡುವುದೊಂದು ಆಗಿದೆ. ಆಹಾರ ಆಮದನ್ನು ಕಡಿಮೆ ಮಾಡಲು ಕರೆಕೊಡುವ ಮುಖಂಡರು ಉತ್ಪಾದನೆಯ ಬಗ್ಗೆ ಮುತುವರ್ಜಿ ಕೊಡುವುದಿಲ್ಲ. ಇದರಿಂದ ಅರಣ್ಯ ನಾಶ ಹೆಚ್ಚಿ ಪ್ರಕೃತಿಯ ಸಮತೋಲನ ತಪ್ಪುತ್ತದೆ" ಎಂದು ಅಭಿಪ್ರಾಯಪಟ್ಟರು.

ಬಹುಮಾನ ಹಂಚಿದ ಪಶ್ಚಿಮ ವಲಯ ಪೋಲೀಸ್ ಡಿಐಜಿ ಎಲ್.ರೇವಣ ಸಿದ್ದಯ್ಯ, ಕಾಲೇಜುಗಳಲ್ಲಿ ವಿದ್ಯಾರ್ಥಿ ಸಂಘಗಳನ್ನು ನಿಷೇಧಿಸಬೇಕೆನ್ನುವ ಸಲಹೆ ಸರ್ಕಾರದ ಪರಿಶೀಲನೆಗೆ ಬಂದಿತ್ತು. ಆದರೆ ವಿದ್ಯಾರ್ಥಿಗಳ ಪಠ್ಯೇತರ ಚಟುವಟಿಕೆಗಳು, ಅದರಿಂದಾಗಿ ಅವರ ಕ್ರಿಯಾ ಶೀಲತೆ ಬೆಳೆಯಬೇಕಾದರೆ ವಿದ್ಯಾರ್ಥಿ ಸಂಘಗಳು ಅತ್ಯಗತ್ಯ" ಎಂದು ಹೇಳಿ, "ಇಲ್ಲಿನ ವಿದ್ಯಾರ್ಥಿ ಸಂಘ ಒಳ್ಳೆಯ ಮಾದರಿಯಾಗಿದೆ" ಎಂದು ಹೊಗಳಿದರು.

## ಶೃಂಗೇರಿಯ ಮೈಸೂರು ಬ್ಯಾಂಕ್ ಶಾಖೆ ಹೊಸ ಕಟ್ಟಡಕ್ಕೆ

ಶೃಂಗೇರಿ: ಇಲ್ಲಿನ ಮೈಸೂರು ಬ್ಯಾಂಕ್ ಶಾಖೆಯನ್ನು ಹರಿಹರ ಬೀದಿಯಲ್ಲಿರುವ ಹೊಸ ಆವರಣಕ್ಕೆ ಮಾ. ೫ರಂದು ಸ್ಥಳಾಂತರಿಸಲಾಯಿತು. ಉದ್ಘಾಟನೆಯನ್ನು ಕಿರಿಯ ಮಠಾಧೀಶರಾದ ಭಾರತೀ ತೀರ್ಥರು ನೆರವೇರಿಸಿದರು. ಬ್ಯಾಂಕಿನ ಮ್ಯಾನೇಜಿಂಗ್ ಡೈರೆಕ್ಟರ್ ಸಂತಾನಕೃಷ್ಣ ಅಧ್ಯಕ್ಷತೆ ವಹಿಸಿದ್ದರು. ರೀಜನಲ್ ಮ್ಯಾನೇಜರ್ ಮುರಳೀಧರ್ ಸ್ವಾಗತಿಸಿ ಶಾಖಾ ಮ್ಯಾನೇಜರ್ ಶಂಕರರಾವ್ ವಂದಿಸಿದರು.

## ಗೋವಿಂದ ಗೌಡರಿಗೆ ಅಭಿನಂದನಾ ಸಮಾರಂಭಗಳು

ಕೊಪ್ಪ: ಇಲ್ಲಿನ ತಾ.ವ್ಯ.ಮಾ.ಸ.ಸಂಘದ ವತಿಯಿಂದ ಸಂಘದ ಮಾಜಿ ಅಧ್ಯಕ್ಷರೂ ಆದ ಶಾಸಕ ಹೆಚ್.ಜಿ.ಗೋವಿಂದಗೌಡರಿಗೆ ಮಾ. ೮ರಂದು ಅಭಿನಂದನಾ ಸಮಾರಂಭ ನಡೆಯಿತು.

ಗುಣವಂತೆ ರಸ್ತೆಯ ಭಾಗ್ಯೋದಯ ಯುವಕ ಸಂಘದ ಆಶ್ರಯದಲ್ಲಿ ಮಾ. ೭ರಂದು ಅಭಿನಂದನಾ ಸಮಾರಂಭ ಹಾಗೂ ಉಚಿತ ನಿವೇಶನ ಸಾಗುವಳಿ ಚೀಟಿ ವಿತರಣೆ ಕಾರ್ಯಕ್ರಮ ನಡೆದವು. ಯುವಕ ಸಂಘದ ಸದಸ್ಯರಿಂದ ಮನರಂಜನಾ ಕಾರ್ಯಕ್ರಮ, ನಾಟಕ ನಡೆದವು.

## ಕ್ರೀಡಾಕೂಟ

ಕೊಪ್ಪ: ಇಲ್ಲಿನ ಪ್ರಥಮ ದರ್ಜೆ ಕಾಲೇಜಿನ ಪ್ರಥಮ ವಾರ್ಷಿಕೋತ್ಸವದ ಪ್ರಯುಕ್ತ ಕ್ರೀಡಾಕೂಟ ಮಾ. ೮ರಂದು ನಡೆಯಿತು. ಬಿ.ಜಿ.ಚಿದಂಬರ್ ಅಧ್ಯಕ್ಷತೆಯಲ್ಲಿ ಪಿ.ಜಿ.ಗುರ್ಜರ್ ಕೂಟ ಉದ್ಘಾಟಿಸಿದರು.

ತಲಾ ೧೨ ವಿವಿಧ ಸ್ಪರ್ಧೆಗಳಲ್ಲಿ ಸುಮಾರು ೧೦೦ಕ್ಕೂ ಹೆಚ್ಚು ವಿದ್ಯಾರ್ಥಿ–ವಿದ್ಯಾರ್ಥಿನಿಯರು ಆಸಕ್ತಿಯಿಂದ ಭಾಗವಹಿಸಿದ್ದರು. ಪ್ರಿನ್ಸಿಪಾಲ್ ಕೆ.ವಿ.ಲಿಂಗಪ್ಪ ಸ್ವಾಗತಿಸಿ, ಕ್ರೀಡಾ ಕಾರ್ಯದರ್ಶಿ ಪ್ರಭಾಕರ್ ವಂದಿಸಿದರು.

## ಒಂಟಿ ಡುಬ್ಬ ಒಡೆದು

(೩ನೇ ಪುಟದಿಂದ)

ಇನ್ನು ಮುಂದಾದರೂ ಒಂದು ತೆರೆದ ಬಾವಿಯನ್ನು ಕಲ್ಪಿಸಿ ಕೊಡುವಂತೆ ಹೊಸ ಶಾಸಕರಾದ ಗೋವಿಂದೇ ಗೌಡ್ರು ಇಲ್ಲಿಗೆ ಒಂದು ಬಾವಿಯನ್ನು ಮಂಜೂರು ಮಾಡಿಸಿ ಕೊಡಬೇಕೆಂದು 'ಮುಂಜಾವು' ಪತ್ರಿಕೆ ಮೂಲಕ ಪ್ರಾರ್ಥಿಸಿಕೊಳ್ಳುತ್ತೇವೆ.

—ನೊಂದ ಜನತಾ ಮನೆಗಳ ನಿವಾಸಿಗಳು, ಜೊನ್ನುಲಪುರ.

[ಈ ಪತ್ರದ ನಕಲನ್ನು ೨೭–೨–೮೩ ರಂದು ಕ್ಷೇತ್ರಾಭಿವೃದ್ಧಿ ಅಧಿಕಾರಿಗಳ ಪ್ರತಿಕ್ರಿಯೆಗಾಗಿ ಕಳಿಸಿದೆ. ಆದರೆ ಈ ವರೆಗೂ ಉತ್ತರ ಬಂದಿಲ್ಲ. —ಸಂ]

## 'ಪಟಭದ್ರ' ಪ್ರೇಕ್ಷಣೀಯ ಸ್ಥಳಗಳು;

(೩ನೇ ಪುಟದಿಂದ)

ಮಾಡುವ ಹಣವಷ್ಟೆಲ್ಲ ಪ್ರತಿ ಸಲವೂ ಇವೇ ನುಂಗುತ್ತವೆ. ಬಹುಶಃ ಸರ್ಕಾರದ ದೃಷ್ಟಿಯಲ್ಲಿ ಪ್ರೇಕ್ಷಣೀಯ ಸ್ಥಳಗಳೆಂದರೆ ವಿದೇಶೀ ಪ್ರವಾಸಿಗರನ್ನು ಈಗಾಗಲೇ ಆಕರ್ಷಿಸುತ್ತಿರುವಂಥವು ಮಾತ್ರ ಎಂದಿರಬೇಕು.

ಆದ್ದರಿಂದ—

"ನರಸಿಂಹ ಪರ್ವತವನ್ನೇ ಆಗಲೀ, ಮಸಲಾ ಶೃಂಗೇರಿಯನ್ನೇ ಆಗಲಿ ಪ್ರವಾಸಿ ಕೇಂದ್ರವಾಗಿ ಅಭಿವೃದ್ಧಿ ಪಡಿಸಬೇಕೆನ್ನುವವರು ಮೊದಲು ವಿದೇಶಗಳಲ್ಲಿ ಪ್ರಚಾರ ಮಾಡಿ ಅಲ್ಲಿಗೆಲ್ಲ ವಿದೇಶೀ ಪ್ರವಾಸಿಗರು ಹಿಂಡು ಹಿಂಡಾಗಿ ಬರುವಂತೆ ಮಾಡಿಕೊಳ್ಳಿ!" ಎಂಬ ತಲೆಕೆಳಗಾದ ಸಲಹೆ ಕೊಡಬೇಕಾಗಿದೆ. ಸರ್ಕಾರದ ಇಲಾಖೆಯ ನೀತಿಯೂ ಇದೇ ಅಲ್ಲವೆ?

—ಗುಂಡಪ್ಪ, ಶೃಂಗೇರಿ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ:
ಸಿರಿಮನೆ ನಾಗರಾಜ್.
ಅಚ್ಚು: ದೀಪಜಗೆ ಅಚ್ಚುಕೂಟ, ಕೊಪ್ಪ

## ಶ್ರೇಣಿಗಳಿಗೆ ಸನ್ಮಾನ

ಬಸರೀಕಟ್ಟೆ: ಮಾ. ೩ರಂದು ಹೆಚ್. ವಿ. ಮಹಾಬಲಯ್ಯ ಇವರ ಅಧ್ಯಕ್ಷತೆಯಲ್ಲಿ "ಯಕ್ಷಗಾನ ಭಾರ್ಗವ" ರಾಜ್ಯ ಪ್ರಶಸ್ತಿ ವಿಜೇತ ಶ್ರೇಣಿಗೋಪಾಲಕೃಷ್ಣ ಭಟ್ಟರನ್ನು ಬಸರೀಕಟ್ಟೆ ಶ್ರೀ ಸದ್ಗುರು ಪ್ರೌಢಶಾಲೆಯ ವತಿಯಿಂದ ಸನ್ಮಾನಿಸಲಾಯಿತು.

ಶ್ರೇಣಿಯವರು ಯಕ್ಷಗಾನ ಕಲೆ, ಅದರ ಬೆಳವಣಿಗೆ ಕುರಿತು ಮಾತನಾಡಿದರು. ಮುಖ್ಯೋಪಾಧ್ಯಾಯ ಎಂ. ವಾಸುದೇವ ಭಟ್ಟರು ಶ್ರೇಣಿಯವರಿಗೆ ಶಾಲು ಹೊದಿಸಿ ಶ್ರೀಗಂಧದ ಶಾರದಾ ದೇವಿಯ ವಿಗ್ರಹವನ್ನು ಕೊಟ್ಟು ಸನ್ಮಾನಿಸಿದರು. ಟಿ. ವಿ. ಲಕ್ಷ್ಮೀನಾರಾಯಣ್ ಸನ್ಮಾನಪತ್ರ ವಾಚನ ಮಾಡಿದರು. ಹೆಚ್.ಎಸ್.ಕೃಷ್ಣಮೂರ್ತಿ ಅತಿಥಿಗಳ ಪರಿಚಯವನ್ನು ಮಾಡಿಸಿದರು. ಬಿ. ವಿ. ಶ್ರೀನಿವಾಸ್ ಸ್ವಾಗತಿಸಿ, ಹೆಚ್. ಎಸ್. ವಿಶ್ವನಾಥ್‌ರಾವ್ ವಂದಿಸಿದರು.

ಟಿ.ಆರ್.ನಾರಾಯಣ ಅವರ ಗಾಯನ ಹಾಗೂ ಶಾಲಾ ಮಕ್ಕಳಿಂದ ಹಾಡು ನೃತ್ಯಗಳಿದ್ದ ಸಮಾರಂಭ ಆಕರ್ಷಕವಾಗಿ ಜರುಗಿತು.